ಮುಂಜಾವು
ವಾರಪತ್ರಿಕೆ.
ಸಂಪಾದಕ: ಸಿರಿಮನೆ ನಾಗರಾಜ್
'MUNJAVU' Kannada Weekly. KOPPA - CHM. ಫೋನ್: 114
5ನೇ ವರ್ಷ 40ನೇ ಸಂಚಿಕೆ ಕೊಪ್ಪ 28-6-1987 ಭಾನುವಾರ ಬೆಲೆ 50 ಪೈಸೆ

# ಬೊಂಬಾಯಿಗೆ ಹುಡುಗಿಯರ ಸಾಗಿಸುವ ಜಾಲ ಇದೆ

**ಕೊಪ್ಪ: ಕಳೆದ ಮಾರ್ಚಿ 27ರ ಸುಮಾರಿಗೆ ಇದೇ ತಾಲ್ಲೂಕಿನ ದಯಂಬಳ್ಳಿ (ಎತ್ತಿನಹಟ್ಟಿ)ಯಿಂದ ನಾಪತ್ತೆಯಾಗಿದ್ದು, ಬೊಂಬಾಯಿಯ ವೇಶ್ಯಾವಾಟಿಕೆಗೆ ಸಾಗಿಸಲ್ಪಟ್ಟಿದ್ದಾರೆಂದು ಗುಲ್ಲಾಗಿದ್ದ ಯಶೋದ ಮತ್ತು ಗಿರಿಜ ಎಂಬ ಹರಿಜನ ಯುವತಿಯರನ್ನು ಇಲ್ಲಿನ ಪೋಲೀಸರು ಬೊಂಬಾಯಿಯಲ್ಲಿ ಪತ್ತೆ ಹಚ್ಚಿ ಕರೆತಂದು ಅವರ ತಂದೆ-ತಾಯಿಗಳ ವಶಕ್ಕೆ ಒಪ್ಪಿಸಿದ್ದಾರೆ.**

ಈ ಬಗ್ಗೆ ಯಶೋದಳ ತಂದೆ ಕೆಂಚಯ್ಯ ಮತ್ತು ಗಿರಿಜಳ ತಂದೆ ಶೇಷಯ್ಯ ಅವರುಗಳು ಕೊಪ್ಪ ಪೋಲೀಸ್ ಠಾಣೆಗೆ ದೂರು ಕೊಟ್ಟಿದ್ದನ್ನೂ, ಆ ಬಗ್ಗೆ ನಮ್ಮ 3.5.87ರ ಸಂಚಿಕೆಯಲ್ಲಿ 'ನಿಜ ಸಂಗತಿ ಬಯಲಾಗುವುದೆ?' ಎಂಬ ಶೀರ್ಷಿಕೆಯಲ್ಲಿ ವಿವರವಾದ ವರದಿ ಪ್ರಕಟವಾದುದನ್ನೂ ಇಲ್ಲಿ ಸ್ಮರಿಸಬಹುದು.

### ಪ್ರಕರಣ ಬರ್ಖಾಸ್ತು

ಈ ಯುವತಿಯರು 'ತಾವು ತಮ್ಮ ಸ್ವಂತ ಇಚ್ಛೆಯಿಂದ ಬೊಂಬಾಯಿಗೆ ಹೋಗಿ ಮನೆಗೆಲಸ ಮಾಡಿಕೊಂಡಿದ್ದುದಾಗಿ' ಠಾಣೆಯಲ್ಲಿ ಹೇಳಿಕೆ ಕೊಟ್ಟಿರುವುದರಿಂದ ಜಿಲ್ಲಾ ಪೋಲೀಸ್ ಮುಖ್ಯಾಧಿಕಾರಿ ಓಂಪ್ರಕಾಶ್‌ರವರ ಮಾರ್ಗದರ್ಶನ ಪಡೆದು ಪ್ರಕರಣವನ್ನು ಬರ್ಖಾಸ್ತುಗೊಳಿಸಿ, ಅವರನ್ನು ಅವರ ತಂದೆ-ತಾಯಿಗಳಿಗೆ ಒಪ್ಪಿಸಿದ್ದಾಗಿಯೂ, ಅವರನ್ನು ಬೊಂಬಾಯಿಗೆ ಸಾಗಿಸಿದ ಆರೋಪಕ್ಕೆ ಗುರಿಯಾಗಿದ್ದ ರಾಜಶೇಖರ, ಶ್ರೀನಿವಾಸ ಮತ್ತು ನಾರಾಯಣ ದೇವಾಡಿಗ ಎಂಬವರನ್ನು ಬಿಡುಗಡೆ ಮಾಡಿರುವುದಾಗಿಯೂ ತಿಳಿದು ಬಂದಿದೆ.

### ಸತ್ಯ ಬೇರೆ ಇದೆ

ಈ ಪ್ರಕರಣದ ಬಗ್ಗೆ ಹೆಚ್ಚಿನ ವಿವರ ಪಡೆಯಲು 'ಮುಂಜಾವು' ಈ ಯುವತಿಯರನ್ನೂ, ಖುಲಾಸೆಯಾದ ಆರೋಪಿಗಳಲ್ಲೊಬ್ಬನನ್ನೂ ಸಂದರ್ಶಿಸಿದಾಗ ಪೂರ್ತಿ ಸತ್ಯಾಂಶ ಬೇರೆಯೇ ಇರುವುದು ಕಂಡು ಬಂತು. **ಯುವತಿಯರು ಬೊಂಬಾಯಲ್ಲಿ ಬೆಲೆವೆಣ್ಣುಗಳಾಗಿ ಸುಮಾರು ಒಂದೂವರೆ ತಿಂಗಳಿಗೂ ಹೆಚ್ಚು ಕಾಲ ಇದ್ದುದೂ ನಿಜ; ಆರೋಪಿಗಳು ಅವರನ್ನು ಸುಳ್ಳು ಹೇಳಿ ಪುಸಲಾಯಿಸಿ ಬೊಂಬಾಯಿಗೆ ಸಾಗಿಸಿದ್ದೂ ನಿಜ; ಈ ಅನ್ಯಾಯದಲ್ಲಿ ಸಂತ್ರಸ್ತರು ನಿರ್ಗತಿಕ ಕೂಲಿಕಾರರಾದ್ದರಿಂದ ಕೇಸನ್ನು ಬಹಳ ಸಲೀಸಾಗಿ ಬಿಟ್ಟು ಕೊಡಲಾಗಿದೆ-ಎಂಬ ಅಂಶಗಳು ಅಂಗೈ ಮೇಲಿರುವಷ್ಟು ಸ್ಫುಟವಾಗಿ ಕಂಡು ಬರುತ್ತವೆ.** 'ಮುಂಜಾವು'ಗೆ ದೊರೆತ ಮಾಹಿತಿಗಳನ್ನು ಇಲ್ಲಿ ಯಥಾವತ್ತಾಗಿ ಕೊಡಲಾಗಿದೆ.

### 'ಘರ್ ವಾಲಿ'

ಹಿಂದೆ ದಯಂಬಳ್ಳಿಯಲ್ಲಿದ್ದು **ಈಗ ಕೆಸವೆ**ಯಲ್ಲಿರುವ ನಾರಾಯಣ **ದೇವಾಡಿಗ ಎಂಬವನ ಅತ್ತಿಗೆ ಬೊಂಬಾಯಲ್ಲಿ 22 ವರ್ಷ ಇದೇ 'ವೃತ್ತಿ'**ಯಲ್ಲಿದ್ದು ಈಗ 'ಧಂಧೆ' **ನಡೆಸುವವಳು.** ನಾರಾಯಣ ಆವಳ ಏಜಂಟನಾಗಿ, **ಹುಡುಗಿ**ಯರನ್ನು ಒದಗಿಸಲು ಹಂಚನೂರು **ಶಿಂಗಪ್ಪ** ಗೌಡರ ಮಗ ಶ್ರೀನಿವಾಸ **ಮತ್ತು ಕುಂಚಕೆರೆ** ಅಣ್ಣೇಗೌಡರ ಮಗ ರಾಜಶೇಖರ – **ಇವರನ್ನು** ಸಂಪರ್ಕಿಸಿದ.

ಮನೆಯಲ್ಲಿ ಜಮೀನಿದ್ದೂ ಅದರಲ್ಲಿ **ದುಡಿಯದೆ** ಅವರಿವರಿಗೆ 'ಬಿಸಿನೆಸ್'(!) **ಮಾಡಿಕೊಂಡು ಪುಂಡಲೆಯುವ** ಸಂಸ್ಕೃತಿಯೊಂದು **ಈಚೆಗೆ ಹಳ್ಳಿ**ಗಾಡಲ್ಲಿ ಹಬ್ಬುತ್ತಿದೆಯಲ್ಲ; ಇವರೂ **ಅದಕ್ಕೇ** ಸೇರಿದವರೆನ್ನುತ್ತಾರೆ ಊರವರು.

### 'ಪ್ರೇಮ-ಜಾಲ'

ತಮ್ಮ ಅಕ್ಕ ಪಕ್ಕದ ಹಳ್ಳಿಗಳ **ಕೂಲಿಯ** ಹುಡುಗಿಯರಾದ ಸುಮಾರು 20ರ **ಪ್ರಾಯದ** ಈ ಯಶೋದ ಮತ್ತು ಗಿರಿಜರನ್ನು **ತಮ್ಮ** 'ಪ್ರೇಮ'ದ ಮೋಡಿಗೆ ಸಿಕ್ಕಿಸಿಕೊಂಡ **ಈ** ಯುವಕರು, ಸುಮಾರು ಒಂದು **ತಿಂಗಳಿಗೂ** ಹೆಚ್ಚು ಕಾಲ ಸಿನಿಮಾ, ಅದೂ-ಇದೂ ಎಂದು ಜಂಬಪುರ ಮುಂತಾದೆಡೆ ಅಗೀಗ **ಸುತ್ತಿ**ಸಿದರು. ನಂತರ ಶ್ರೀನಿವಾಸ ಗಿರಿಜಳನ್ನೂ, ರಾಜಶೇಖರ ಯಶೋದಳನ್ನೂ ಮದುವೆಯಾಗುವುದಾಗಿ ನಂಬಿಸಿ, ಅವರ ತಂದೆ-ತಾಯಿಗಳ ಕಣ್ಣು **ತಪ್ಪಿಸಿ**, ನಾರಾಯಣನೊಡನೆ ಉಡುಪಿಗೆ ಕರೆದೊಯ್ದರು

ಅಲ್ಲಿ ಬೊಂಬಾಯಿಗೆ ಹೋಗುವ ಬಸ್ಸಿಗೆ ಹತ್ತಿಸಿದ 'ಪ್ರಿಯಕರ'ರು "ನಮಗೆ ಈ ಬಸ್ಸಲ್ಲಿ ಸೀಟು ಸಿಕ್ಕಲಿಲ್ಲ. ಇನ್ನೊಂದು ಬಸ್ಸಲ್ಲಿ ಬರುತ್ತೇವೆ. ಇವರು ಸೀದಾ ನಿಮ್ಮನ್ನು ರೂಮಿಗೇ ಕರೆದುಕೊಂಡು ಹೋಗುತ್ತಾರೆ" ಎಂದು ಹೇಳಿ ಇಳಿದರು. ಅಲ್ಲಿಂದ ಇವರು ತಲುಪಿದ್ದು ಬೊಂಬಾಯಿಯ ಘರ್‌ವಾಲಿಯ ಕೋಣೆಯನ್ನು! ಅಲ್ಲಿ ಇಬ್ಬರನ್ನೂ ಬೇರ್ಪಡಿಸಲಾಯಿತು.

### ಬೊಂಬಾಯಿಯಲ್ಲಿ

ತಾವು ಯಾವುದಕ್ಕೆ ಹೊರಟು ಎಲ್ಲಿಗೆ ತಲುಪಿದೆವು ಎಂಬುದು ಅರಿವಾಗುತ್ತಲೇ ಹುಡುಗಿಯರು, "ನಮ್ಮನ್ನು ಇಲ್ಲಿಗೇಕೆ ತಂದಿರಿ? ಊರಿಗೆ ಕಳಿಸಿಕೊಡಿ" ಎಂದು ಅತ್ತು ಪ್ರತಿಭಟಿಸತೊಡಗಿದರು. ಆಗ ಹೊಡೆತಗಳು ಬಿದ್ದವು. ಇಷ್ಟು ದಿನದಲ್ಲಿ ಒಟ್ಟು ಮೂರ್‍ನಾಲ್ಕು ಬಾರಿ ಹೊಡೆದಿದ್ದರಂತೆ.

ಅದೊಂದು ನಾಲ್ಕೈದು ಅಂತಸ್ತಿನ ದೊಡ್ಡ ಕಟ್ಟಡ. ಅದರ ಪೂರ್ತಿ ವೇಶ್ಯಾವಾಟಿಕೆಗಳೇ. ಯಶೋದ ಇದ್ದ ಕೋಣೆಯಲ್ಲಿ ಇನ್ನೂ 9 ಜನ ಹುಡುಗಿಯರು, ಗಿರಿಜ ಇದ್ದಲ್ಲಿ ಇನ್ನೂ 6 ಜನ ಇದ್ದರು. ಒಟ್ಟು ಸುಮಾರು ಆ ಕಟ್ಟಡದಲ್ಲಿ 4'0-500 ಜನ ಹುಡುಗಿಯರಿದ್ದಿರಬಹುದು. ಕನ್ನಡ ಮಾತಾಡುವವರೇ ಬಹಳ ಜನ ಇದ್ದರು.

### ಗಿರಾಕಿಗಳು

ದಿನಕ್ಕೆ ನಾಲ್ಕೈದು ಗಿರಾಕಿಗಳನ್ನು ತಣಿಸಬೇಕಾಗುತ್ತಿತ್ತು. ಒಬ್ಬ ಗಿರಾಕಿಗೆ 20 ರೂ., ದಪ್ಪದವನಾದರೆ 30 ರೂ. ವಸೂಲು ಮಾಡುತ್ತಿದ್ದರು. ಇವರಿಗೆ ಏನೂ ಕೊಡುತ್ತಿರಲಿಲ್ಲ. ಹಾಕಿಕೊಳ್ಳಲು 3 ಸೀರೆ-ಲಂಗ-ರವಿಕೆಗಳನ್ನು (ವೇಶ್ಯಾವಾಟಿಕೆಯ 'ಚಿರಪರಿಚಿತ' ರಂಗು-ರೂಪಿನವು) ಕೊಟ್ಟದ್ದು ಬಿಟ್ಟರೆ ಮತ್ತೇನೂ ಕೊಟ್ಟಿಲ್ಲವಂತೆ. ಊಟ-ತಿಂಡಿ ಹೊಟ್ಟೆ ತುಂಬ ಸಿಗುತ್ತಿತ್ತು.

ಅಲ್ಲಿ ಗಲಾಟೆಗಳಾದಾಗ ಅದನ್ನು ನಿಯಂತ್ರಿಸಲು ಒಬ್ಬ ರೌಡಿಯಿರುತ್ತಾನೆ, ಆವನ ಕೈಯಾಳುಗಳೂ ಇರುತ್ತಾರೆ. ಇವರಿಗೆ ಅಲ್ಲಿನ ಭಾಷೆ ಬರುವವರೆಗೆ ಹೊರಕ್ಕೆ ತಿರುಗಾಡಲು ಬಿಡುವುದಿಲ್ಲವಂತೆ.

### ತನಿಖೆ

ಇತ್ತ, ಕೆಲಸಕ್ಕೆ ಹೋದ ಈ ಹುಡುಗಿಯರು ಬಾರದಿದ್ದಾಗ ಅವರ ತಂದೆ-ತಾಯಿಗಳು ಅಲ್ಲಿ-ಇಲ್ಲಿ ಹುಡುಕಿ, ಕೊನೆಗೆ ಪೋಲೀಸಿಗೆ ದೂರು ನೀಡಿದರು.

ಆದರೆ ಈ ಇಬ್ಬರು ಯುವಕರ ಪೈಕಿ ಒಬ್ಬನ ಮನೆಯಲ್ಲಿ ಕೆಲಸಕ್ಕಿದ್ದ ಗಿರಿಜಳ ಅಣ್ಣ ಶಿಂಗಪ್ಪ ತನ್ನ ತಂಗಿ ಆಗಾಗ್ಗೆ ಹೀಗೇ ಮಂಗಳೂರಿಗೆ ಹೋಗಿ ಬರುವ 'ಚಾಳಿ' ಇದ್ದವಳೆಂದು ಹೇಳಿಕೆ ಕೊಟ್ಟುದಲ್ಲದೆ, ಬೇರಾವ ಸರಿಯಾದ ಸುಳಿವು-ಸಾಕ್ಷ್ಯಾಧಾರಗಳೂ ಸಿಗದಿದ್ದಾಗ ಸಬ್ ಇನ್‌ಸ್ಪೆಕ್ಟರ್ ದುರ್ಗಯ್ಯ ಕೇಸನ್ನು ಚುಕ್ತಾ ಮಾಡಿದ್ದರು. **(ಶಿಂಗಪ್ಪ ಈ ಯುವಕರ ಅಡಿಯಾಳಾಗಿ ವರ್ತಿಸಿರುವುದು ಸ್ಪಷ್ಟವಾಗಿ ಕಂಡು ಬರುತ್ತದೆ.)**

ಆದರೆ ನಮ್ಮ 3.5.87ರ 'ನಿಜ ಸಂಗತಿ ಬಯಲಾಗುವುದೆ?' ವರದಿಯ ಪ್ರೇರಣೆಯಿಂದ ಹಾಗೂ ಆವರಿಗೆ 'ಮುಂಜಾವು'ಗೆ ತಿಳಿದು ಬಂದಿದ್ದ ಕೆಲವು ಸಂಗತಿಗಳ ಎಳೆ ಹಿಡಿದುಕೊಂಡು ಪುನಃ ತನಿಖೆಗಿಳಿದ ದುರ್ಗಯ್ಯ, ಹಲವು ಗಟ್ಟಿಯಾದ ಸಂಶಯದ ಎಳೆಗಳ ಆಧಾರದ ಮೇಲೆ ಈ ಇಬ್ಬರನ್ನೂ ತೀವ್ರವಾಗಿ ಪ್ರಶ್ನೆಗೆ ಗುರಿಪಡಿಸಿದಾಗ ನಾರಾಯಣನ 'ಲಿಂಕ್' ಹೊರಬಂತು. ಆತನನ್ನು ಕಷ್ಟಪಟ್ಟು, ಬಸವಾನಿಯಲ್ಲಿ ಕಣ್ಣಾಮುಚ್ಚಾಲೆಯಾಡಿ ಹಿಡಿದಾಗ ಹುಡುಗಿಯರ ವಿಳಾಸ ಸಿಕ್ಕಿತು. ಆದರೆ ಘರ್‌ವಾಲಿಯ ಹೆಸರನ್ನು ಶಾರದಾ ಸೇರೆಗಾರ್ತಿ ಎಂದು ಕೊಡಲಾಗಿದೆ. ನಿಜವಾದ ಹೆಸರು ಪಾರ್ವತಿ ಎಂದು ಹುಡುಗಿಯರು ಹೇಳುತ್ತಾರೆ.

### ಜಾತಿ, ಬಣ್ಣ ಅಡ್ಡಿ !?

"ಈ ಹುಡುಗಿಯರು ಹರಿಜನರಾದ್ದರಿಂದಲೂ, ಕಪ್ಪಾಗಿದ್ದು ಅಷ್ಟೇನೂ ಸುಂದರಿಯರಲ್ಲದ್ದರಿಂದಲೂ, ಅವರನ್ನು ಅಲ್ಲಿ ಯಾವ ಘರ್‌ವಾಲಿಯೂ ಕೊಂಡುಕೊಳ್ಳಲಿಲ್ಲ. ಕೊನೆಗೆ, ಖರ್ಚುಮಾಡಿ ಕರೆದೊಯ್ದ ತಪ್ಪಿಗೆ ಅವರನ್ನು ಅಲ್ಲಿ ಮನೆಗೆಲಸಕ್ಕೆ ಸೇರಿಸಿದ್ದೆವು" ಎಂಬುದು ನಾರಾಯಣನ ಹೇಳಿಕೆಯಂತೆ. ಆದರೆ ಇದು ಸುಳ್ಳು.

### ಸರ್ಕಲ್ ಇನ್‌ಸ್ಪೆಕ್ಟರ್ ಮುಂಬೈಗೆ

ಇಷ್ಟು ಮಾಹಿತಿ, ವಿಳಾಸ ಎಲ್ಲ ಸಿಕ್ಕಿದ ನಂತರ ಎಸ್ಪಿಯವರ ಆದೇಶದಂತೆ ಸರ್ಕಲ್ ಇನ್‌ಸ್ಪೆಕ್ಟರ್ ಕೇಶವಾನಂದ ಅವರು ನಾರಾಯಣನನ್ನೂ ಬೊಂಬಾಯಿಗೆ ಕರೆದೊಯ್ದು, ಹುಡುಗಿಯರನ್ನು ಕರೆದು ತಂದರು. ತಾವು ಊರಿಗೆ ಬರುವುದಿಲ್ಲಎಂದೂ ಅವರುಗಳು ಬಹಳ ತಕರಾರು ಮಾಡಿದರೆಂದೂ, ಇಲ್ಲಿ ಠಾಣೆಯಿಂದ ತಂದೆ ತಾಯಿಗಳ ಜೊತೆ ಹೋಗುವಾಗ ಕೂಡ ಅತ್ತು ರಂಪ ಮಾಡಿದರೆಂದೂ ಅವರು ಹೇಳುತ್ತಾರೆ. ಅವರಿಗೆ ಹೊಡೆಯದಂತೆ ತಂದೆ-ತಾಯಿಗಳಿಗೆ ತಾಕೀತು ಮಾಡಿ ಕಳಿಸಲಾಯಿತಂತೆ.

### ಬೆದರಿಕೆ

"ನಿಮಗೆ ಸುಳ್ಳು ಹೇಳಿ ವಂಚಿಸಿ ಕರೆದೊಯ್ದುದನ್ನೂ, ನೀವು ಇಲ್ಲಿ ನಡೆಸುತ್ತಿದ್ದುದನ್ನೂ ಸತ್ಯ ಹೇಳಿ ಬಿಟ್ಟರೆ, ನಿಮ್ಮನ್ನೂ ನಮ್ಮನ್ನೂ ಇಬ್ಬರನ್ನೂ ಜೈಲಿಗೆ ಹಾಕುತ್ತಾರೆ; ಆದ್ದರಿಂದ 'ಸ್ವ-ಇಚ್ಛೆಯಿಂದ ಕೆಲಸಕ್ಕಾಗಿ ಹೋದುದು, ಮನೆಗೆಲಸ ಮಾಡಿಕೊಂಡಿದ್ದುದು'—ಎಂತಲೇ ಹೇಳಬೇಕು. ಸತ್ಯ ಏನಾದರೂ ಹೇಳಿದರೆ ಪುನಃ ಒದ್ದು ಇಲ್ಲಿಗೇ ಕರೆತರುತ್ತೇವೆ" ಎಂದು ಭಯಂಕರವಾಗಿ ಬೆದರಿಸಿ ಕಳಿಸಿದ್ದರಿಂದ ತಾವು ಪೋಲೀಸರಿಗೆ ಹಾಗೇ ಹೇಳಿಕೆ ಕೊಟ್ಟುದಾಗಿ ಹುಡುಗಿಯರು ಹೇಳುತ್ತಾರೆ

**ಅಷ್ಟೇ ಅಲ್ಲ, ತಮ್ಮನ್ನು ಕರೆದುಕೊಂಡು ಬಂದ ಪೋಲಿಸಿನವರು ಸಹ "ನೀವಾಗಿಯೇ ಹೋಗಿದ್ದೆಂದು ಹೇಳಿಕೆ ಕೊಟ್ಟುಬಿಡಿ" ಎಂದು ಹೇಳಿಕೊಟ್ಟುದಾಗಿ ಕೂಡ ಅವರು ಹೇಳುತ್ತಾರೆ!** (ಎಷ್ಟು ತಿರುಗ-ಮುರುಗ ಮಾಡಿ ಕೇಳಿದರೂ ಅವರು ಇದನ್ನು ಸ್ಪಷ್ಟವಾಗಿ ಹೇಳುತ್ತಾರೆ!)

"ನಮ್ಮನ್ನು ಕರೆದೊಯ್ದುದಕ್ಕೆ ಒಬ್ಬೊಬ್ಬರಿಗೆ ಹತ್ತತ್ತು ಸಾವಿರ ರೂ. ಕೊಟ್ಟಿದ್ದಾರಂತೆ. ಇಲ್ಲಿ 5 ಸಾವಿರ, ನಾವು ಅಲ್ಲಿಗೆ ತಲುಪಿದ ಮೇಲೆ 5 ಸಾವಿರ" ಎನ್ನುತ್ತಾರೆ ಹುಡುಗಿಯರು. "ಮೂರು ಮೂರು ಸಾವಿರ ಸಿಕ್ಕಿದೆಯೆನ್ನುತ್ತಾರೆ" ಎಂಬುದು ಊರವರ ಹೇಳಿಕೆ. "ನಾರಾಯಣ ನಮಗೆ ಒಬ್ಬೊಬ್ಬರಿಗೂ ಖರ್ಚಿಗೆ ಐನೂರು ಐನೂರು ರೂ. ಕೊಟ್ಟ" ಎಂದು ರಾಜಶೇಖರ ಹೇಳುತ್ತಾನೆ.

"ಮದುವೆಯಾಗುವುದಾಗಿ ನಂಬಿಸಿ ಕರೆದೊಯ್ದಿರಂತಲ್ಲ?" ಎಂದರೆ 'ಸುಳ್ಳು' ಎಂದ ಅವನು, ಹುಡುಗಿಯರ ಎದುರಲ್ಲೇ ಕೇಳಿದಾಗ ಅವರಿಗೂ ದಬಾಯಿಸುತ್ತಾ "ಹಾಗಾದರೆ ಸ್ಟೇಶನ್ನಿನಲ್ಲಿ ಅವರು ಹಾಗೇ ಏಕೆ ಹೇಳಿಕೆ ಕೊಡಲಿಲ್ಲ?" ಎಂದು ಉಡಾಫೆ ಹಾರಿಸುತ್ತಾನೆ.

**ಅಂತೂ ಖಚಿತವಾದ ಅಪರಾಧಿಗಳು ಬಚಾವಾಗಿದ್ದಾರೆ. ಕೇಳಬೇಕಾದವರು ನಿರ್ಗತಿಕರಾದ್ದರಿಂದ ನ್ಯಾಯ ಗಾಳಿ ಪಾಲಾಗಿದೆ. ಇಲಾಖೆಯಲ್ಲಿ ಸಾಮಾನ್ಯವಾಗಿ ರೂಢಿಯಲ್ಲಿರುವಂತೆ, ಈವರೆಗೆ ತನಿಖೆ ನಡೆಸಿದ್ದ ದುರ್ಗಯ್ಯನವರೇ ಬೊಂಬಾಯಿಗೆ ಹೋಗಿದ್ದರೆ....? ಎಸ್ಪಿಯವರು ಅವರನ್ನೇಕೆ ಕಳಿಸಲಿಲ್ಲವೋ....!?**

# ವೇದಿಕೆ · ಓದುಗರ ಪ್ರತಿಕ್ರಿಯೆಗಳು

## 5. ಕಪ್ಪು ಪ್ರೇತಗಳ ಅಪ್ಪುಗೆಯಲ್ಲಿ

ಎಲ್ಲ ಕೋಳಿಗಳು
ಕತ್ತೆತ್ತಿ ಕೂಗಿದರೂ
ಇವರಿನ್ನೂ ಎದ್ದಿಲ್ಲ.
ಕತ್ತಲೆಯ ಬಿಟ್ಟು
ಏಳುವಾಸೆಯೂ ಇಲ್ಲ.
ಇನ್ನೂ ಬೆಳಕ ಕಂಡಿಲ್ಲ
ಕಂಡಿಗಳೇ ಇಲ್ಲ
ಇವರ ಮನೆಯ
ಹೃದಯಗಳಿಗೆ.
ಅಂತೇ
ಜಾತಿಯ ಕಪ್ಪು
ಪ್ರೇತಗಳ
ಅಪ್ಪುಗೆಯಲ್ಲೇ
ಸಿಕ್ಕಿ ಸೊರಗುತ್ತಿದ್ದಾರೆ.
ಬೆಳೆವ ಬಯಕೆಯ
ಬೆಳಕ
ಕೊಳಕು ಕೊಚ್ಚೆ
ಯಿಂದ
ಕಪ್ಪಾಗಿಸಲು
ಹೆಣಗಿ ಹೆಣವಾಗುತ್ತಿದ್ದಾರೆ.

—'ಓದುಗ', ತೀರ್ಥಹಳ್ಳಿ

## 6. ಅಭಿನಂದನೆ, ಬೆಂಬಲ

ಪ್ರಿಯ ನಾಗರಾಜ್.

ನಿಮ್ಮಲ್ಲಿಯ ವಿಚಿತ್ರ ಪರಿಸ್ಥಿತಿಗಳ ಬಗ್ಗೆ ಪತ್ರಿಕೆಯಲ್ಲಿ ಓದಿ ನಂಬಲಾಗಲಿಲ್ಲ. ಇಂಥ ಅನಿಷ್ಟ ಪದ್ಧತಿಗಳು, ಅಮಾನವೀಯ ವಿಚಾರಗಳನ್ನು — ಎಷ್ಟೇ ತೊಂದರೆಗಳ ನಡುವೆಯೂ ದೃಢವಾಗಿ ಎದುರಿಸುತ್ತಿರುವ ನಿಮಗೆ ನಮ್ಮೆಲ್ಲರ ಅಭಿನಂದನೆ ಮಾತ್ರವಲ್ಲ, ಪೂರ್ಣವಾದ ಸಕ್ರಿಯ ಬೆಂಬಲವೂ ಇದೆ.

—ಬಿ. ಕೆ ಸುಂದರೇಶ್,
ಸಿ. ಪಿ. ಐ. ಜಿಲ್ಲಾ ಕಾರ್ಯದರ್ಶಿ,
ಚಿಕ್ಕಮಗಳೂರು.

## 7. ಬಡವರ ಏಳಿಗೆಗಾದರೂ ಗಮನ ಕೊಡಲಿ

ಮಾನ್ಯರೆ,

7.6.87ರ ಪತ್ರಿಕೆಯಲ್ಲಿನ 'ಶಿವಳ್ಳಿ ಬ್ರಾಹ್ಮಣ ಮುಖಂಡರ ಕಲ್ಯಾಣ ಕಾರ್ಯಕ್ರಮಗಳ' ಬಗ್ಗೆ ಓದಿದಾಗ ನನಗೆ ಅನ್ನಿಸಿದ್ದು ಇದು: ಈ ಮುಖಂಡರೆನ್ನಿಸಿಕೊಂಡವರು 'ಹಿಂದೂ ಸಂಸ್ಕೃತಿ' ಅಥವಾ 'ಹಿಂದೂ ಧರ್ಮಶಾಸ್ತ್ರ'ದ ಹೆಸರಿನಲ್ಲಿ ಶುದ್ಧೀಕರಿಸಿ, ಪಂಚಗವ್ಯ ಕುಡಿಸಿ, ಜಾತಿ ಶುದ್ಧಪಡಿಸಲು ಹೋಗುವ ಬದಲು ಬಡವರ ಏಳಿಗೆಯ ಬಗ್ಗೆ–ಕಡೇ ಪಕ್ಷ ತಮ್ಮ ನಡುವೆಯೇ ಇರುವ ಬಡವರದ್ದಾದರೂ ಏಳಿಗೆಯ ಬಗ್ಗೆ ಹೆಚ್ಚಿನ ಗಮನ ಕೊಡುವುದು ಮತ್ತು ಹರಿಹರಪುರ ಮಠದ ಧರ್ಮ ರಕ್ಷಣೆಯ ಕಡೆಗೇ ಇನ್ನಾದರೂ ಗಮನ ಹರಿಸುವುದು ಉತ್ತಮ, ಅಲ್ಲವೆ?....

—ಬಿ. ಹಾಲಪ್ಪ. ಗೌಡ,
ಬಾಳೆಮನೆ.

## 8. ಯಾವುದು ಸಮಾಜದ್ರೋಹ? ಯಾರಿಗೆ ಪ್ರಾಯಶ್ಚಿತ್ತ?

7-6-87ರ ಸಂಚಿಕೆಯಲ್ಲಿ ಪ್ರಕಟವಾದ "ಹೆತ್ತಮಕ್ಕಳಿಗೆ ತಂದೆಯ ಮನೆಯಿಂದಲೇ ಬಹಿಷ್ಕಾರ; ವೃದ್ಧ ತಂದೆ–ತಾಯಿಗಳಿಗೆ ಬಲಾತ್ಕಾರದ ಪ್ರಾಯಶ್ಚಿತ್ತ" ಇದನ್ನು ಓದಿ ತುಂಬಾ ನೋವಾಯಿತು.

ಡಿಸೆಂಬರ್ 7 ರಂದು ನಡೆದ ನಿಮ್ಮ ತಂಗಿ ಸುನಂದರವರ ಸರಳ ವಿವಾಹಕ್ಕೆ ನಾನೂ ಬಂದಿದ್ದೆ. ಈ ಸರಳ ಸಮಾರಂಭದಲ್ಲಿ ಕೆಲವು ಮಂದಿ ವಿಚಾರವಂತ ಹಿರಿಯರು, ಈ ಸರಳ ಜಾತ್ಯತೀತ ವಿವಾಹದ ಬಗ್ಗೆ ಆಡಿದ ಮಾತುಗಳು ಇನ್ನೂ ನನ್ನ ಮನಸ್ಸಿನಲ್ಲಿ ಸಂತೋಷವನ್ನುಂಟುಮಾಡುತ್ತಿವೆ. ಇದೊಂದು ಪ್ರೇಮ ವಿವಾಹ ಇರಬೇಕೆಂದು ತಿಳಿದಿದ್ದ ನನಗೆ ತುಂಬಾ ಆಶ್ಚರ್ಯವನುಂಟುಮಾಡಿದ್ದು, ಸಹೋದರರೇ ಮುಂದೆ ನಿಂತು ತಮ್ಮ ತಂಗಿಗೆ ಅಂತರ್ಜಾತಿ ವಿವಾಹ ಮಾಡಿದರಲ್ಲ; ಸುನಂದಕ್ಕನವರು ಈ ಅಂತರ್ಜಾತಿ ವಿವಾಹಕ್ಕೆ **ಸಂತೋಷದಿಂದ** ಒಪ್ಪಿದ್ದಾರಲ್ಲ ಎಂಬುದು. (ಅವರು ಸಂತೋಷದಿಂದ ಒಪ್ಪಿದ್ದಾರೆಂಬುದು ಅಂದು ಅವರನ್ನು ನೋಡಿದ ಯಾರಿಗಾದರೂ ಮನವರಿಕೆಯಾಗಿರುತ್ತದೆ.)

ಈ ವಿಚಾರವನ್ನು ನಾನು ನನ್ನ ಸ್ನೇಹಿತರು ಹಾಗೂ ನಮ್ಮ ಬಂಧುಗಳ ಹತ್ತಿರ ಹೇಳಿಕೊಂಡು ಹೆಮ್ಮೆಪಟ್ಟಿದ್ದೆ. ನಮ್ಮ ಸಮಾಜದಲ್ಲಿ ಬೇರೂರಿರುವ ಜಾತೀಯತೆಯನ್ನು ಬೇರು ಸಹಿತ ಕೀಳಲು ಇಂತಹ ವಿವಾಹ ಈ ಸಮಾಜಕ್ಕೆ ಒಂದು ಮಾರ್ಗದರ್ಶನವಾಗಿತ್ತು ಎಂಬುದರಲ್ಲಿ ಎರಡು ಮಾತಿಲ್ಲ.

ಸಮಾಜ ಇಷ್ಟು ಮುಂದುವರಿದಿದ್ದರೂ ಇಲ್ಲಿ ಇನ್ನೂ ಸಹ ಪ್ರೇಮ ವಿವಾಹಕ್ಕೆ ಕೂಡ ಒಪ್ಪಿಗೆ ನೀಡುವುದಿಲ್ಲ. ಮದುವೆಗೆ ಹುಡುಗ ಅಥವಾ ಹುಡುಗಿಯ ಒಪ್ಪಿಗೆ ಆಗತ್ಯವಿಲ್ಲ. ಹುಡುಗ–ಹುಡುಗಿ ಪ್ರೇಮಿಸಿದರೆ ಆ ಪ್ರೇಮಿಗಳನ್ನು ದೂರ ಮಾಡ ಬಯಸುವವರೇ ಹೆಚ್ಚು. ಇಂತಹ ಸಮಯದಲ್ಲಿ ಸಹೋದರರೇ ಮುಂದೆ ನಿಂತು ತಮ್ಮ ತಂಗಿಗೆ ಅಂತರ್ಜಾತಿ ವಿವಾಹ ಮಾಡಿದ್ದು ಎಲ್ಲರೂ ಹೆಮ್ಮೆ ಪಡುವ ವಿಷಯವಾಗಿದೆ. ಅದೇ ರೀತಿ ಸಿದ್ದುಸ್ವಾಮಿಯವರ ಅಣ್ಣ ಮತ್ತು ತಂದೆಯವರ ಬಗ್ಗೆ ಕೂಡ.

**ಧರ್ಮಶಾಸ್ತ್ರದಲ್ಲಿ ವಿರೋಧಿಸಿದ್ದನ್ನು ಮಾಡಿದ ತಕ್ಷಣ ಜಾತಿ ಕೆಟ್ಟುಹೋಗುವುದಾದರೆ ನಮ್ಮ ಉಚ್ಚ ಜಾತಿಗಳವರಲ್ಲಿ ಎಷ್ಟು ಮಂದಿಗೆ ಇಂದು ಜಾತಿಯಿದೆ? ಈ ನಮ್ಮ ಸಮಾಜದಲ್ಲಿ ನಾವೇ ಸೃಷ್ಟಿಸಿರುವ ಕೆಳಮಟ್ಟದ ಜಾತಿಯ ಹೆಣ್ಣು ಮಕ್ಕಳ ಜೊತೆ ಮೇಲುಜಾತಿಗಳ ಎಷ್ಟು ಮಂದಿ ಸಂಬಂಧ ಇಟ್ಟುಕೊಂಡಿಲ್ಲ? ಇವರಿಗೆಲ್ಲ ಎಂತಹ ಶಿಕ್ಷೆ ಕೊಟ್ಟಿದ್ದಾರೆ? ಈ ಗುರುಗಳ ಅಥವಾ ಮುಖಂಡರ ಕಣ್ಣೆದುರೇ ಇಂತಹದು ಎಷ್ಟು ನಡೆಯುವುದಿಲ್ಲ? ಅದು ಕದ್ದು ಮುಚ್ಚಿ ನಡೆಯುವಂತಹ ಕೆಲಸ, ಆದ್ದರಿಂದ ಅವುಗಳನ್ನು ಗುಪ್ತವಾಗಿಯೇ ಇಟ್ಟಿರುತ್ತಾರೆ. ಇದು ಎಲ್ಲರ ಎದುರು ನಡೆದಿರುವಂತಹ ವಿವಾಹ. ಆದ್ದರಿಂದ ಅದಕ್ಕೆ ಬಹಿರಂಗ ವಿರೋಧವೆ?**

ಇಂತಹ ವಿವಾಹ ಫ್ಯಾಶನ್‌ಗಾಗಿ ಮಾಡುತ್ತಿದ್ದಾರೆ ಎಂದು ತಿಳಿದಿರಬಹುದು. ಆದರೆ ಇಂತಹ ವಿವಾಹ ಸಮಾಜದ ಮೇಲೆ ಎಷ್ಟೊಂದು ಪ್ರಭಾವ ಬೀರುತ್ತದೆ ಎಂದು ಇವರಿಗೇನು ಗೊತ್ತು? ಇವರಿಗೆಲ್ಲ ಇಡೀ ಸಮಾಜದ ಏಳಿಗೆ ಬೇಕಾಗಿಲ್ಲ; ಕೇವಲ ತಮ್ಮದೊಂದು ಜಾತಿಯ ಏಳಿಗೆಗಾಗಿ ಹಗಲು–ಇರುಳು ಶ್ರಮಿಸುತ್ತಿರುವಂತೆ ದೊಡ್ಡ 'ಶೋ' ಮಾಡಿ ತಮ್ಮ ಏಳಿಗೆಗಾಗಿ ಮಾತ್ರ ಶ್ರಮಿಸುತ್ತಿದ್ದಾರೆ ಎಂಬುದನ್ನು ಎಲ್ಲರೂ ಅರಿಯಬೇಕು.

ಹರಿಹರಪುರ ಗುರುಗಳಾಗಲಿ, ಬೇರೆ ಯಾರೇ ಆಗಲಿ, ಸಮಾಜದ ಏಳಿಗೆಯನ್ನು ನಿಜವಾಗಿಯೂ ಬಯಸುವುದಾದರೆ ಹೆತ್ತ ಮಕ್ಕಳನ್ನು ತಂದೆ–ತಾಯಿಯರಿಂದ ದೂರ ಮಾಡುತ್ತಿರಲಿಲ್ಲ. ಒಂದು ವೇಳೆ ಯಾರೋ ಪ್ರಾಯಶ್ಚಿತ್ತವನ್ನೇ ಕೇಳಿ ಬಂದರೂ ಅವರಲ್ಲಿ ಆತ್ಮ ವಿಶ್ವಾಸ ತುಂಬುವುದರ ಜೊತೆಗೆ ಅವರ ಮೇಲೆ ಸವಾರಿಗೆ ಹೊರಟಿರುವ ತಮ್ಮ ಅನುಯಾಯಿಗಳಿಗೆ ಸೂಕ್ತ ತಿಳುವಳಿಕೆ ನೀಡಿ ಸಮಸ್ಯೆಯನ್ನು ಬಿಡಿಸಲು ಖಂಡಿತಾ ಸಾಧ್ಯವಿತ್ತು. ಇಂಥ ಉದ್ದೇಶಕ್ಕಾಗಿಯೇ ಪೂರ್ವಿಕರು ಗುರುಪೀಠಗಳನ್ನು ರಚಿಸಿದ್ದು ಹೊರತು ಬರಿಯ ಒಣ ಪ್ರವಚನಗಳಿಗಲ್ಲ ಎಂಬುದು ಎಲ್ಲರಿಗೂ ಗೊತ್ತು.

ಆದರೆ ಈ ಗುರುಗಳಿಗೆ ಭಾಷಣದಲ್ಲಿ ಸಮಾಜ ಉದ್ಧಾರ ಆಗಬೇಕು, ನೀತಿಯಲ್ಲಿ ಜಾತಿ ಉದ್ಧಾರ ಆಗಬೇಕು ಎಂಬಂತೆ ಕಾಣುತ್ತಿದೆ. ಈ ಗುರುಗಳು ಎಂದೂ ಹೀಗೆ ಸಿಕ್ಕಿ ಬಿದ್ದಿರಲಿಲ್ಲ. ಸಿಕ್ಕಿ ಬಿದ್ದರೂ ತನ್ನ ಮಾತಿನ ಚಾಣಾಕ್ಷತನದಿಂದ ತಪ್ಪಿಸಿಕೊಳ್ಳುತ್ತಿದ್ದರು

ನಗು–ನಗುತ್ತ ಇರಬೇಕಾದ ಸಂಸಾರಕ್ಕೆ 'ಜಾತಿ' ಎಂಬ ವಿಷ ಬೀಜ ಬಿತ್ತಿ ಸಂಸಾರವನ್ನು ಚೂರು–ಚೂರು ಮಾಡಲು ಹೊರಟಿರುವ ಇವರಿಗೂ ಇವರ ಹಿಂಬಾಲಕರಿಗೂ ಬ್ರಾಹ್ಮಣ ಸಮಾಜದಲ್ಲಿಯೂ ಕೂಡ ಕೆಲವೇ ಬೆರಳೆಣಿಕೆಯ ಜನರ ಬೆಂಬಲ ಇರಬಹುದೇ ವಿನಹ ಎಲ್ಲರ ಬೆಂಬಲವೂ ಇಲ್ಲ. ಏಕೆಂದರೆ **ಹೆಣ್ಣು ಮಕ್ಕಳ ಮದುವೆಯ ಸಮಸ್ಯೆ ಎಲ್ಲರ ಮನೆಯಲ್ಲೂ ಇದೆ. ಈ** ಇಡೀ ವಿಚಾರ ಆ ಸಮಸ್ಯೆಗೆ ಸಂಬಂಧಪಟ್ಟಿದ್ದು ಎಂಬುದನ್ನು ಇವರೆಲ್ಲ ಎಷ್ಟು ಪ್ರಯತ್ನ ಪಟ್ಟರೂ ಜನಸಾಮಾನ್ಯರಿಂದ ಮುಚ್ಚಿಡಲು ಇವರಿಗೆ ಸಾಧ್ಯವಿಲ್ಲ.

(3ನೇ ಪುಟಕ್ಕೆ)

## 9. ಇಂಥ ವಾತಾವರಣ ನಾಚಿಕೆಗೇಡು

7.6 87 ರ ಮುಂಜಾವು ವಾರಪತ್ರಿಕೆ ಓದಿ ನೋವು, ಬೇಸರ ಉಂಟಾಯಿತು. 21 ನೇ ಶತಮಾನಕ್ಕೆ ಓಡುತ್ತಿರುವ ಈ ದಿನಗಳಲ್ಲೂ ಇಂಥದೊಂದು ವಾತಾವರಣ ಇರುವುದು ನಮಗೆಲ್ಲ ನಾಚಿಕೆಗೇಡಿನ ವಿಷಯ.

ಮದುವೆಯಂಥ ತೀರಾ ವೈಯಕ್ತಿಕ ಹಾಗೂ ಹುಡುಗ-ಹುಡುಗಿ, ಅವರ ತೀರಾ ಹತ್ತಿರದ ಸಂಬಂಧಿಗಳು, ಹಿತೈಷಿಗಳು ನಿರ್ಧರಿಸಬೇಕಾದ ಇಂಥ ವಿಷಯಗಳಲ್ಲಿ ಮೂರನೇ ವ್ಯಕ್ತಿಗಳು ಅನಧಿಕೃತವಾಗಿ ಪ್ರವೇಶಿಸಿ ಮದುವೆಯಾದವರನ್ನು ಹಾಗೂ ಅವರ ಮನೆಯಲ್ಲಿನ ಜನರನ್ನು ಮಾನಸಿಕವಾಗಿ ಹಿಂಸಿಸಲು ಇವರಿಗೆ ಯಾವ ಹಕ್ಕೂ ಇಲ್ಲ. ಇದು ತೀರಾ ಅನಾಗರಿಕವಾದುದು.

ಸರಕಾರ ಇಂಥದಕ್ಕೆಲ್ಲ ಕಾನೂನು ಮಾಡಿದರೆ ಸಾಲದು, ಸ್ವಲ್ಪವಾದರೂ ಬುದ್ಧಿಯಿರುವ, ಯೋಚಿಸುವ ಶಕ್ತಿ ಹೊಂದಿರುವ ಯುವ ಜನಾಂಗವಾದರೂ ಬಹಿಷ್ಕಾರ ಇತ್ಯಾದಿಗಳನ್ನು ವಿರೋಧಿಸಿದರೆ ಹಾಗೂ ಇಂಥ ಮದುವೆಗಳನ್ನು ಬೆಂಬಲಿಸಿದರೆ ಸಮಾಜದ ಸ್ವಲ್ಪವಾದರೂ ಸುಧಾರಣೆ ಸಾಧ್ಯವೆನ್ನಿಸುತ್ತದೆ.

ಈ ಮೇಲಿನ ಎರಡನ್ನೂ ಮಾಡದವರು ಬುದ್ಧಿ ಹಾಗೂ ಯೋಚನಾಶಕ್ತಿ ಇಲ್ಲದವರು ಎಂಬುದನ್ನು ಸಾಬೀತು ಮಾಡಿದಂತೆಯೇ.

ಹರಿಜನರೊಂದಿಗೆ ಮದುವೆಯಾದರೆ ಇವರಿಗೆಲ್ಲ ಮೈಲಿಗೆಯಾಗುತ್ತದೆ ಅಥವಾ ಜಾತಿ ಹೋಗುತ್ತದೆ; ಉತ್ತಮ ಜಾತಿ **ಎಂದು ಕರೆಸಿಕೊಳ್ಳುವ ಜಾತಿಗಳ ಗಂಡಸರು ಹಿಂದೆಲ್ಲ ಅಥವಾ ಈಗಲೂ ಹಲವು ಕಡೆ ಹರಿಜನ ಹೆಂಗಸರೊಂದಿಗೆ ಅನೈತಿಕ ಸಂಬಂಧವಿಟ್ಟುಕೊಂಡರೆ ಅದು ಮೈಲಿಗೆ ಅಲ್ಲವೆ?**

**ಗುಣ, ನಡತೆ ಎಲ್ಲದರಲ್ಲೂ** ಶ್ರೇಷ್ಠ ಮಟ್ಟದವರಾದ, ಈ ಮುಪ್ಪಿನ ದಂಪತಿಗಳನ್ನು ತೀರ್ಥ ಕೊಟ್ಟು ಜಾತಿಗೆ ಸೇರಿಸಿಕೊಳ್ಳಬಯಸುವ ಸ್ವಾಮಿಗಳು ಹಾಗೂ ಉಳಿದ ದೊಡ್ಡ ದೊಡ್ಡ ಜನರೆಂದು ಕರೆದು ಕೊಳ್ಳುವ ಅವರ ಹಿಂಬಾಲಕರೇ ಇದರಲ್ಲಿ ಯಾವುದು ಮೈಲಿಗೆ ಅಂತ ಉತ್ತರ ಹೇಳಲಿ

**ಕು|| ವಿಜಯಾ, ಧಾರವಾಡ.**

## 10. ಪ್ರಕಟಿಸುವಅಗತ್ಯವಿತ್ತೆ?

ಸಂಪಾದಕರೆ,

ಮುಖಂಡರೋ, ಪುರೋಹಿತರೋ ಸೇರಿ ನಿಮ್ಮ ತಂದೆಯವರಿಗೆ ಪ್ರಾಯಶ್ಚಿತ್ತ ಮಾಡಿಸಿದರೆ ಅವರ ಪಾಡಿಗೆ ಅವರು ಮಾಡಿಕೊಳ್ಳಲಿ. ಅದಕ್ಕೆ ನೀವ್ಯಾಕೆ ಮಹತ್ವ ಕೊಟ್ಟು ಪ್ರಕಟಿಸಬೇಕಾಗಿತ್ತೋ ಅರ್ಥವಾಗುವುದಿಲ್ಲ. ಮದುವೆಯಾದ ಹುಡುಗ–ಹುಡುಗಿ ಚೆನ್ನಾಗಿದ್ದಾರಷ್ಟೆ? ಅಷ್ಟಾದರೆ ಆಯಿತಲ್ಲ?

—ಎಚ್. ಬಲವಂತರಾವ್,
ಕೊಪ್ಪ

ನರಸಿಂಹರಾಜಪುರ ತಾಲ್ಲೂಕಿನ ಮಂಡಲ ಪ್ರಧಾನರು – 4 ಮೆಣಸೂರು ಮಂಡಲ

# ಬಂದೇ ಬಂದ್ರು.... ಬೆಳ್ಳ....! ಬೆಳ್ಳಯ್ಯ....!! ಬೆಳ್ಳಯ್ಯ ಗೌಡ್ರು!!!

ಹೀಗೆ ಒಂದೊಂದೇ ಅಕ್ಷರವನ್ನು ಕೂಡಿಕೊಳ್ಳುತ್ತಾ ಬಂದ ಬೆಳ್ಳಯ್ಯ ಗೌಡರು ಆಲಂದೂರಿನ ಬಡ ರೈತ ಕುಟುಂಬದಲ್ಲಿ ಜನಿಸಿದವರು. ಗಂಗಯ್ಯ ಗೌಡರು ಇವರ ತಂದೆ. ಓದಿ ಬರೆಯುವಷ್ಟು ವಿದ್ಯಾಭ್ಯಾಸವಿದ್ದರೂ ಅನುಭವದ ಪರಾಕ್ರಮವೇ ಹೆಚ್ಚು. ಸುಮಾರು ಮುವತ್ತು ವರ್ಷಗಳಷ್ಟು ಹಿಂದೆಯೇ ರಾಜಕೀಯದ ಕೆಂಪು ವೇಸ್ಟ್ ಕೋಟ್ ಧರಿಸಿದ ಇವರು ಲೆಕ್ಕವಿಲ್ಲದಷ್ಟು ಸ್ಥಳೀಯ ಸಂಘ–ಸಂಸ್ಥೆಗಳಿಗೆ ಸದಸ್ಯರು, ಉಪಾಧ್ಯಕ್ಷರು, ಅಧ್ಯಕ್ಷರೂ ಆಗಿ ಹೋಗಿದ್ದಾರೆ. ಇತ್ತೀಚೆಗೆ "ಕರ್ನಾಟಕ ರಾಜ್ಯ ಸಮಾಜವಾದಿ ರೈತ ಕಾರ್ಮಿಕ ಪಕ್ಷ" ಕಟ್ಟಿ ಅದರ ಅಧ್ಯಕ್ಷರೂ ಇವರೇ ಆಗಿದ್ದಾರೆ. (ಇದರ ಸದಸ್ಯರ ಸಂಖ್ಯೆ ಸರಿಯಾಗಿ ತಿಳಿದು ಬರುವುದಿಲ್ಲ!) ಬಾಯಿ ಮುಂದಿದ್ದಷ್ಟೇ ಕೆಲಸವೂ ಆಗಬೇಕೆನ್ನುವುದು ಇವರ ಚಪಲ. ಸದ್ಯಕ್ಕೆ ತಾಲ್ಲೂಕ್ ಜನತಾ ಪಕ್ಷದ ಉಪಾಧ್ಯಕ್ಷರೂ ಆಗಿರುವ ಮೆಣಸೂರು ಮಂಡಲ ಪ್ರಧಾನರಾದ 51ರ ಪ್ರಾಯದ ಬೆಳ್ಳಯ್ಯ ಗೌಡರಿಗೆ ಈ ಮಂಡಲದ ಪ್ರಜೆಗಳು ಮತ್ತು ನೌಕರ–ಅಧಿಕಾರಿಗಳೊಂದಿಗೆ ಶುಭ ಹಾರೈಸುತ್ತಾ....

ಬಂದೇ ಬಂದ್ರುss.... ಪ್ರಜಾರಾಜ.... ಬೆಳ್ಳಯ್ಯ ಗೌಡರಿಗೆss....ಬಹು ಪರಾಕ್– ಇದನ್ನು ವಂದಿ ಮಾಗಧರಲ್ಲ ಹೇಳಿದ್ದು, ಹೋಗೇss ಹೋಗ್ತಾರೆ....ಎಂದು ಕಾದು ನೋಡುತ್ತಿದ್ದ ನೌಕರ ವರ್ಗ. ಕಾನೂನು ಚೌಕಟ್ಟಿನಲ್ಲಿ ಕೆಲಸ ಮಾಡುವುದೇ ಕಷ್ಟವಾಗಿರುವಾಗ ಕಾನೂನು ಬಿಟ್ಟಾದರೂ ಈ ಪ್ರಧಾನರ ಕೆಲಸ ಮಾಡಿ ಇವರು ಇಲ್ಲಿಂದ ತೊಲಗಿದರೆ ಸಾಕೆನ್ನುವ 'ನೋವಿನ' ನೌಕರ ವರ್ಗ.

ಇವರ ಸೋಷಿಯಲಿಸಂ ಅಂದಿನ ಸೋಷಲಿಸ್ಟ್ ಪಾರ್ಟಿಯಿಂದ ಇಂದಿನ ಜನತಾ ಪಾರ್ಟಿವರೆಗೆ ಹರಿದು ಬಂದಿದೆ ಇವರೇ ಹೇಳುವಂತೆ ಇವರ ಮಿತ್ರರೆಲ್ಲಾ ಮಂತ್ರಿಗಳೇ. ಕಾಗೋಡು ತಿಮ್ಮಪ್ಪ, ಬಂಗಾರಪ್ಪ, ಕೋಣಂದೂರು ಲಿಂಗಪ್ಪ—ಆಳಿ ಹೋದವರು. ಜೆ. ಎಚ್. ಪಟೇಲ್, ದೇವೇಗೌಡ್ರು—ಆಳುವ ಮುಂತಾದವರೆಲ್ಲಾ ಇವರ ಕೆಂಪು ಕೋಟಿನ ಹಿಂಭಾಗ ತಟ್ಟಿದವರೇ ಆಗಿದ್ದಾರಂತೆ

ಇವರು ಕನಸಿನಲ್ಲೂ ಬೆಚ್ಚಿ ಬಿದ್ದು ನೆನಸುವ ದಿವಂಗತ ಶಾಂತವೇರಿ ಗೋಪಾಲಗೌಡ್ರು, ದಿವಂಗತ ದಯಾನಂದ ಆರ್. ಕಲ್ಲೆ ಇವರಿಗೆ ಪ್ರಾತಃಸ್ಮರಣೀಯರು. ಈ ಸಾರಿ ಮಂಡಲದ ತಮ್ಮ ಕ್ಷೇತ್ರ ಚುನಾವಣೆಯಲ್ಲಿ ತಮ್ಮ ವ್ಯಕ್ತಿತ್ವವನ್ನೇ ಮರೆತು ರಾಮಕೃಷ್ಣ ಹೆಗ್ಗಡೆ. ಎಚ್.ಜಿ ಗೋವಿಂದ ಗೌಡರು, ದಿ|| ದಯಾನಂದ ಕಲ್ಲೆ ಇವರುಗಳ ಫೋಟೋಗಳೆ ಇವರ ಪ್ರಚಾರ ಪತ್ರಿಕೆಯನ್ನು ಅಲಂಕರಿಸಿದ್ದವು. ಅಲ್ಲಿ ಗೆದ್ದು ನಂತರ ಪ್ರಧಾನರಾದದ್ದು ಕತ್ತೆ ಒದೆತದ ರಾಜಕೀಯ ಅದೃಷ್ಟ ಎನ್ನದೆ ವಿಧಿಯಿಲ್ಲ.

ಕನ್ನಡ ಸಾಹಿತ್ಯ ಪರಿಷತ್ತಿನ ಸುಮಧುರ ಮಲ್ಲಿಗೆ ಬಳ್ಳಿ ತಾಲ್ಲೂಕಿನಾದ್ಯಂತ ಹಬ್ಬಿದ್ದರೂ ಬುಡ ಮಾತ್ರ ಕುಂಡದಲ್ಲಿರುವುದನ್ನು ಇವರು ಪ್ರಧಾನರಾದ ಮಾರನೇ ದಿನವೇ ಇವರ ಗಮನಕ್ಕೆ ತಂದಾಗ "ನನ್ನ ಆಫೀಸ್ ಪಕ್ಕದಾಗೆ ನೆಟ್ಟು ಬಿಡಾನ—ನಮ್ದೆ ಜಾಗ ಕೊಡ್ತೀವಿ" ಎಂದ ಇವರ ಕನ್ನಡ ಅಭಿಮಾನ ಪರಿಷತ್ ಕೈ ಜೋಡಿಸಿ ಸ್ವಾಗತಿಸುವಂಥದ್ದು; ಈ ಮಂಡಲದ ಉಳಿದ ಸದಸ್ಯರೂ ಇವರೊಂದಿಗೆ ಪಕ್ಷ ಭೇದವಿಲ್ಲದೆ ಸಹಕರಿಸುವರೆಂಬ ನಂಬಿಕೆ ಪರಿಷತ್ತಿಗೆ!

ಇವರ ಮಂಡಲ ಬಾಂಗ್ಲಾ ದೇಶದ ಸುತ್ತಾ ಇರೋ ಭಾರತ ದೇಶದ ಹಾಗೆ! ರಾಜೀವ ಗಾಂಧಿ ಭಾರತದ ಪ್ರಧಾನಿಯಾದರೆ ಇವರು ಬಡಗಬೈಲು (ಮೆಣಸೂರು) ಪ್ರಧಾನಿ(ನ). ಇವರ ಮಂಡಲದ ಸಮಸ್ಯೆಗಳ ಪಟ್ಟಿ ಮಾಡಿದರೆ, ಇವರು ಸಂಪರ್ಕ ಹೊಂದಿದ್ದ ಸಂಘ–ಸಂಸ್ಥೆಗಳಷ್ಟೇ ಇವೆ. ಈ ಮಂಡಲದ ಮುಕ್ಕಾಲು ಭಾಗ ಭದ್ರಾ ಮುಳುಗಡೆಯ ಜಲಾವೃತ ಪ್ರದೇಶ. ಇದರ ಹೃದಯ ಭಾಗ ನರಸಿಂಹರಾಜಪುರ ಮಂಡಲ ಪ್ರದೇಶ. ಹೀಗಾಗಿ ಅಭಿವೃದ್ಧಿ ಕಾರ್ಯಗಳನ್ನು ಮಾಡಲು ತುಂಬಾ ಚಾಕಚಕ್ಯತೆಯೇ ಬೇಕು. ಶೀತೂರು ಮಂಡಲವನ್ನು ಪಕ್ಕಕ್ಕೆ, ನರಸಿಂಹರಾಜಪುರ ಮಂಡಲವನ್ನು ಮಧ್ಯಕ್ಕೆ ಇಟ್ಟುಕೊಂಡಿರುವ ಈ ಮಂಡಲಕ್ಕೆ ಅಲ್ಲಿನ ಕಾರ್ಯಪ್ರಗತಿಯೇ ಅರ್ಧ ಮಾರ್ಗದರ್ಶನ ಮಾಡಬಲ್ಲದು. ಇನ್ನರ್ಧ ಭಾಗ, ಒಳ್ಳೆ ರೀತಿಯಲ್ಲಿ ಹೇಳಿ ಮಾಡಿಸಲು ಆಗದಿದ್ದಾಗ ಶನಿ ಬಿಡಿಸಿ ಕೆಲಸ ತೆಗೆದುಕೊಳ್ಳುವ ಇವರ ಮಾನ್ಯೂಲ್ ಮಾರ್ಗದಿಂದಲೇ ಆಗುತ್ತದೆ.

ಇಲ್ಲಿ ವಿದ್ಯೆ ಮುಖ್ಯವಲ್ಲ; ಅಧಿಕಾರ – ಅನುಭವ ಮುಖ್ಯ. ಅಧಿಕಾರ ಕೈಯಲ್ಲಿದೆ, ತಮ್ಮ ಅನುಭವದ ಜೊತೆಗೆ ಅಕ್ಕಪಕ್ಕದ್ದನ್ನು ಎರವಲು ಪಡೆವರೇ ಸಾಕು. ನುಂಗಣ್ಣಗಳನ್ನೂ, ದಾರಿ ತಪ್ಪಿಸುವವರನ್ನೂ ದೂರ ಇಟ್ಟು ತಮಗೆ ತಿಳಿದಷ್ಟೇ ಕೆಲಸ ಸಾಧಿಸಿದರೂ ಒಳ್ಳೆಯ ಹೆಸರು ಮಾಡಬಹುದು.

'ಕಳ್ಳ ಸಾಗಾಣಿಕೆ ದಾರಿ' ಎಂದೇ ಹೆಸರು ಪಡೆದಿರುವ ಸೂಳಬಾನಿ – ಗುಳೆಮನೆ ಮಾರ್ಗವಾಗಿ ಮಾರಿದಿಬ್ಬ–ಉಂಬಳೇಬೈಲು

(4ನೇ ಪುಟಕ್ಕೆ)

## ಯಾವುದು ಸಮಾಜದ್ರೋಹ

(2ನೇ ಪುಟದಿಂದ)

ಬೇರೆ ಜಾತೀಯರನ್ನು ಮದುವೆಯಾದರೆ ಜಾತಿಗೆಟ್ಟವರಾಗುತ್ತಾರಾದರೆ, ಮಾನವ ಸಮಾಜಕ್ಕೆ ದ್ರೋಹ ಮಾಡಿದವರು ಗುರುಗಳಾಗುತ್ತಾರೆಯೆ?

ವೃದ್ಧ ತಂದೆ– ತಾಯಿಗಳಿಂದ ಬಲತ್ಕಾರವಾಗಿ ತಮ್ಮ ಮಕ್ಕಳನ್ನು ದೂರ ಮಾಡಲು ಹೊರಟಿರುವ ಇವರ ನೀತಿ ಸಮಾಜ ಒಪ್ಪುತ್ತದೆಯೇ? ಸಂತರ್ಪಣೆ, ಪಂಚಗವ್ಯ, ಮನೆ ಶುದ್ಧೀ ಕರಿಸುವುದು, ಇಷ್ಟು ಮಾಡಿದ ತಕ್ಷಣ ಜಾತಿಸರಿಹೋಗುತ್ತದೆಯೇ?

ಆ ವೃದ್ಧ ತಂದೆ–ತಾಯಿಗಳ ಮನಸ್ಸಿನ ಒಳಗನ್ನು ತಿಳಿಯಲು ಇವರಿಗೆ ಸಾಧ್ಯವೆ? ತಮ್ಮ ಮಕ್ಕಳು ಸಮಾಜ ದ್ರೋಹದ ಕೆಲಸ ಮಾಡಿಲ್ಲ, ಸಮಾಜಕ್ಕೆ ಮಾರ್ಗದರ್ಶಕವಾಗುವಂತಹ ಕೆಲಸವನ್ನೇ ಮಾಡಿದ್ದಾರೆ. ಎಂದು ಅವರು ಖಂಡಿತಾ ತಿಳಿದಿದ್ದಾರೆ.

ಗುರುಗಳು ಮತ್ತು ಅವರ ಹಿಂಬಾಲಕರು ಮಾಡುತ್ತಿರುವ ಸಮಾಜ ದ್ರೋಹದ ಕೆಲಸ ನಾಗರಾಜ್ ಹಾಗೂ ಸುನಂದಕ್ಕ ಇವರ ಕುಟುಂಬಕ್ಕೆ ಮಾತ್ರವಲ್ಲ, ಇಡೀ ಮಾನವ ಸಮಾಜಕ್ಕೆ ಮಾಡುತ್ತಿರುವ ದ್ರೋಹ ಎಂಬುದನ್ನು ಒತ್ತಿ ಹೇಳ ಬಯಸುತ್ತೇನೆ.

—ಸುಧೀರ್, ಆನಂದೂರು.

ಅಗಲಿದ ಹಿರಿಯ ರಾಜಕಾರಣಿ, ದಕ್ಷ ಆಡಳಿತಗಾರ

# ಮಾಜಿ ಶಾಸಕ ಕೆ. ಎನ್. ವೀರಪ್ಪ ಗೌಡರು

—ಒಂದು ಸ್ಮರಣೆ

ಕಳೆದ 50 ವರ್ಷಗಳಿಂದ ಶೃಂಗೇರಿ ತಾಲ್ಲೂಕಿನ, ಆನಂತರ ಶೃಂಗೇರಿ ವಿಧಾನ ಸಭಾ ಕ್ಷೇತ್ರದಿಂದ ಹಿಡಿದು ಜಿಲ್ಲಾ, ರಾಜ್ಯ ಮಟ್ಟಗಳವರೆಗಿನ ರಾಜಕಾರಣದಲ್ಲಿ ಸಕ್ರಿಯರಾಗಿದ್ದು ಜೂನ್ 16 ರಂದು ನಿಧನರಾದ ಮಾಜಿ ಶಾಸಕ ವೀರಪ್ಪಗೌಡರದು ಸಾರ್ಥಕವಾದ ತುಂಬು ಜೀವನ ಎಂದರೆ ಅತಿಶಯೋಕ್ತಿಯಲ್ಲ.

ಅವರಿಗಿದ್ದ ಸೀಮಿತ ಮಟ್ಟದ ವಿದ್ಯಾಭ್ಯಾಸ ಮತ್ತು ಸೈದ್ಧಾಂತಿಕ ವರ್ತುಲದಲ್ಲೂ ಅವರು ಜನಸಾಮಾನ್ಯರ ಬಗ್ಗೆ, ರೈತಾಪಿ ಬದುಕಿನ ಬಗ್ಗೆ ತೋರಿದ ಕಳಕಳಿ, ಆ ದಿಕ್ಕಿನಲ್ಲಿ ಅವರು ನಡೆಸಿದ ಪ್ರಯತ್ನಗಳು ಎಷ್ಟರ ಮಟ್ಟಿಗೆ ಮನ್ನಣೆ ಗಳಿಸಿದವೋ, ಅಷ್ಟೇ ಮಟ್ಟಿಗೆ, ಈ ದೇಶದ ಎಲ್ಲಾ ಉತ್ತಮ ಸಿದ್ಧಾಂತಿಗಳೂ, ದಿಟ್ಟ ಧೀರ ಸಾರ್ವಜನಿಕ ವ್ಯಕ್ತಿಗಳೂ ಅಪಾರ್ಥ–ಅಪಪ್ರಚಾರಗಳಿಗೆ ಒಳಗಾದಂತೆ ಇವರು ಸಹ ಆಗದೆ ಇರಲಿಲ್ಲ. ಆದರೂ ಒಟ್ಟಿನಲ್ಲಿ ಇವರೊಬ್ಬ ಜನಾನುರಾಗಿಯಾಗಿಯೇ ಕೊನೆ ತನಕ ಬಾಳಿದರೆಂಬುದೂ ಗಮನಾರ್ಹ.

### ಶುದ್ಧ ಹಸ್ತ, ದಕ್ಷ ಆಡಳಿತ

ಇಂದಿಗೆ ಸರಿಯಾಗಿ 50 ವರ್ಷಗಳ ಹಿಂದೆ 1937ರಲ್ಲಿ ಪಂಚಾಯ್ತಿ ಸದಸ್ಯರಾಗುವುದರೊಂದಿಗೆ ಮೊಟ್ಟ ಮೊದಲ ಬಾರಿಗೆ ಸಾರ್ವಜನಿಕ ಜೀವನ ಪ್ರವೇಶಿಸಿದ ಗೌಡರು ತಮ್ಮ ಜೀವನದ ಕೊನೆಯ ದಿನಗಳವರೆಗೂ ವಿವಿಧ ಹುದ್ದೆ, ಸ್ಥಾನ–ಮಾನಗಳಲ್ಲಿ ಅವಿಶ್ರಾಂತವಾಗಿ ದುಡಿದರು. ವೈಯಕ್ತಿಕ ಜೀವನದಲ್ಲಿ ಯಾವುದೇ ದುರಭ್ಯಾಸಗಳಿಲ್ಲದೆ ಕಟ್ಟುನಿಟ್ಟಾದ ಶಿಸ್ತಿನ ಜೀವನ ರೂಢಿಸಿಕೊಂಡಿದ್ದ ಅವರ ಶುದ್ಧ ಹಸ್ತದ ಬಗ್ಗೆ ಬಹುಶಃ ಯಾರದೂ ಚಕಾರವಿಲ್ಲ.

ಕೆಂಗಲ್‌ರವರ ಶಿಷ್ಯರಾದ ಗೌಡರು ಅವರಂತೆಯೇ ಒಬ್ಬ ದಕ್ಷ ಆಡಳಿತಗಾರರೆನ್ನಿಸಿಕೊಂಡರು. ನಿಷ್ಠುರಕ್ಕೆ ಅಂಜದೆ, ಮುಲಾಜಿಗೆ ಬಾಗದೆ, ಸಮಸ್ಯೆಗಳನ್ನು ದಿಟ್ಟವಾಗಿ ಎದುರಿಸಿದರು. ರೈತ ಸಮೂಹದ ಹಿತವನ್ನು ತಮ್ಮ ಜೀವನದ ಪರಮೋನ್ನತ ಧ್ಯೇಯವಾಗಿಸಿಕೊಂಡಿದ್ದ ಅವರು ಅಧಿಕಾರಿಗಳಿಗೂ, ಇತರೆ ರೈತ ವಿರೋಧಿ ಶಕ್ತಿಗಳಿಗೂ ಎಂದೂ ಸೊಪ್ಪು ಹಾಕುತ್ತಿರಲಿಲ್ಲ.

### ಮೈಲಿಗಲ್ಲು

ಕಳೆದ 4 ವರ್ಷಗಳಿಂದ ಶಿವಮೊಗ್ಗ ವ್ಯವಸಾಯೋತ್ಪನ್ನ ಮಾರುಕಟ್ಟೆ ಸಮಿತಿಯ ಅಧ್ಯಕ್ಷರಾಗಿ ಅವರು ತಮಗೆ ಸರಿಸಾಟಿಯಾದ ಒಬ್ಬ ದಿಟ್ಟ ಅಧಿಕಾರಿಯಾದ ವ್ಯ.ಮಾ.ಸ. ಕಾರ್ಯದರ್ಶಿ ರಾಮಕೃಷ್ಣ ರೆಡ್ಡಿಯವರೊಂದಿಗೆ ಶಿವಮೊಗ್ಗ (ಅಷ್ಟೇಕೆ-ಇಡೀ ದೇಶದ) ಅಡಿಕೆ ದಲ್ಲಾಳಿ ವರ್ತಕರ ಬಲಿಷ್ಠ ಕೋಟೆಗೆ ಲಗ್ಗೆ ಹಾಕಿ ರೈತರಿಗೆ ಗರಿಷ್ಠ ಮಟ್ಟದ ಪ್ರಯೋಜನ ದೊರಕಿಸುವಲ್ಲಿ ಬಹು ಮಟ್ಟಿಗೆ ಯಶಸ್ವಿಯಾದದ್ದ ಅವರು ಆಡಳಿತ ಜೀವನದಲ್ಲೊಂದು ಮೈಲಿಗಲ್ಲು ಎಂದರೆ ಉತ್ಪ್ರೇಕ್ಷೆಯಲ್ಲ. ಆ ಕೆಲಸ ಇಂದು ಅರ್ಧಕ್ಕೆ ನಿಂತಂತಾಗಿದೆ.

### ಹೋರಾಟಗಾರ

ಸ್ವಾತಂತ್ರ್ಯ ಚಳುವಳಿಯಲ್ಲೂ ಸಕ್ರಿಯವಾಗಿ ಭಾಗವಹಿಸಿದ್ದ ಗೌಡರು 40ರ ದಶಕದಲ್ಲೇ ಗೇಣಿದಾರರನ್ನು ಸಂಘಟಿಸಿ, ಜೀತ, ಬಿಟ್ಟಿ ದುಡಿಮೆಗಳಂಥ ಶೋಷಣೆಯ ವಿರುದ್ಧ ಹೋರಾಟದ ಬಾವುಟ ಹಾರಿಸಿದ್ದರು.

ಶೃಂಗೇರಿಯ ಜೆ.ಸಿ.ಬಿ.ಎಂ. ಕಾಲೇಜಿನ ಸಂಸ್ಥಾಪಕ–ಆಜೀವನ ಸದಸ್ಯರಾಗಿದ್ದ ಅವರು ಶೃಂಗೇರಿ ತಾ.ವ್ಯ.ಮಾ.ಸ. ಸಂಘದ ಸ್ಥಾಪಕ ಅಧ್ಯಕ್ಷರು. ಇನ್ನೂ ಎಷ್ಟೋ ಸಂಘಸಂಸ್ಥೆಗಳಲ್ಲಿ ಸಕ್ರಿಯವಾಗಿ ದುಡಿದವರು.

### ಒಂದು ಜಿಜ್ಞಾಸೆ

ದಿ|| ವೀರಪ್ಪ ಗೌಡರಂತೆಯೇ ವೈಯಕ್ತಿಕ ಜೀವನದಲ್ಲಿ ಶಿಸ್ತು, ಸನ್ನಡತೆ, ಸಚ್ಚಾರಿತ್ರ್ಯಗಳನ್ನು ರೂಢಿಸಿಕೊಂಡು, ಸಾರ್ವಜನಿಕ ಜೀವನದಲ್ಲೂ ಅವರಂತೆಯೇ ಶುದ್ಧ ಹಸ್ತರೂ ಕರ್ತವ್ಯನಿಷ್ಠರೂ ಜನಾನುರಾಗಿಗಳೂ ಎನ್ನಿಸಿಕೊಂಡಿರುವ ನಮ್ಮ ಹಾಲಿ ಶಾಸಕ ಗೋವಿಂದಗೌಡರು ಅವರಂತೆ ದಕ್ಷ ಆಡಳಿತಗಾರರೆನ್ನಿಸಿಕೊಳ್ಳಲಿಲ್ಲ ಏಕೆ? ತಮ್ಮ ಪಕ್ಷದ ಸಮಯ ಸಾಧಕರು, ತಮ್ಮ ಕ್ಷೇತ್ರದ ಪಟ್ಟಭದ್ರ ಮೇಲ್ಜಾತಿ ಹಿತಾಸಕ್ತಿಗಳು ಹಾಗೂ ಗೆದ್ದೆತ್ತಿನ ಬಾಲ ಹಿಡಿದುಕೊಂಡು ಜನಾಭಿಪ್ರಾಯಕ್ಕೂ ಜನ ಶಕ್ತಿಗೂ ಚಳ್ಳೆ ಹಣ್ಣು ತಿನ್ನಿಸುವ ಅಧಿಕಾರಶಾಹಿ — ಇವುಗಳ ಮಧ್ಯೆ ಗೊಂದಲಮಯ ಅತಂತ್ರದಲ್ಲೇ ಇವರ ಅಧಿಕಾರದ ಬಹುಪಾಲು ಕಳೆದು ಹೋದಂತೆನಿಸುತ್ತಿದೆಯಲ್ಲ, ಇದಕ್ಕೇನು ಕಾರಣ? ಕೇವಲ ಬದಲಾದ ಇಂದಿನ ಸರಿಸ್ಥಿತಿಗಳೆ? ರಾಜ್ಯ ನಾಯಕತ್ವದ ಅಸ್ಥಿರತೆ, ಎಡಬಿಡಂಗಿ ತನಗಳೆ? ಅಥವಾ ತಮ್ಮದೇ

(4ನೇ ಪುಟಕ್ಕೆ)

# ಸಣ್ಣ ಬೆಳೆಗಾರರಿಗೆ ಕಾಫಿ ಮಂಡಳಿಯ ಸಾಲ-ಸೌಲಭ್ಯ ನೀಡಿಕೆ ಬಗ್ಗೆ

ಚಿಕ್ಕಮಗಳೂರು: ಕಾಫಿ ಮಂಡಳಿಯ ಅಭಿವೃದ್ಧಿ ಸಾಲಗಳ ಯೋಜನೆಯಂತೆ ಸಣ್ಣ ಬೆಳೆಗಾರರಿಗೆ (ಗರಿಷ್ಠ 10 ಹೆಕ್ಟೇರ್ ಕಾಫಿ ಉಳ್ಳವರು) ನೀಡುವ ಸಾಲ ಮತ್ತು ಸಹಾಯಧನ ಸೌಲಭ್ಯಗಳನ್ನು ಏಪ್ರಿಲ್ 1987 ರಿಂದ ಗಣನೀಯ ಪ್ರಮಾಣದಲ್ಲಿ ಹೆಚ್ಚಿಸಲಾಗಿದೆ.

ಕಡಿಮೆ ಬಡ್ಡಿದರದ (ಡಿಫರೆನ್ಸಿಯಲ್ ರೇಟ್ ಆಫ್ ಇಂಟರೆಸ್ಟ್) ಹೊಸ ಯೋಜನೆಯಂತೆ ಗರಿಷ್ಠ 2 ಹೆಕ್ಟೇರ್ ವಿಸ್ತೀರ್ಣ ಕ್ಕೊಳಪಟ್ಟ ಅತಿ ಸಣ್ಣ ಬೆಳೆಗಾರರಿಗೆ, ಯಂತ್ರೋಪಕರಣ ಮತ್ತು ಬೆಳೆ ಸಾಲಗಳ ಹೊರತು ಉಳಿದ ದೀರ್ಘಾವಧಿ ಸಾಲಗಳನ್ನು ಕೇವಲ ಶೇಕಡಾ 7ರ ಬಡ್ಡಿದರದಲ್ಲಿ ಕೊಡಲಾಗುವುದು. ಈ ಸಾಲ ಪಡೆಯಲು ಕಾಫಿ ರಿಜಿಸ್ಟ್ರೇಷನ್ ಸರ್ಟಿಫಿಕೇಟಿನ ಮೂಲ ಪ್ರತಿಯನ್ನು ಮಾತ್ರ ಕಾಫಿ ಮಂಡಲಿಯಲ್ಲಿ ಒತ್ತೆ ಇಡಬೇಕು. 12 ವರ್ಷಗಳ ಅವಧಿಯ ಎನ್‌ಕಂಬರೆನ್ಸ್ ಸರ್ಟಿಫಿಕೇಟಿನ ವಿನಃ ಬೇರೆ ಯಾವ ದಾಖಲೆಗಳನ್ನು ಒದಗಿಸಬೇಕಾದ ಅವಶ್ಯಕತೆ ಇರುವುದಿಲ್ಲ.

ಸಣ್ಣ ಮತ್ತು ಅತಿ ಸಣ್ಣ ಬೆಳೆಗಾರರು ಈ ಸೌಲಭ್ಯಗಳನ್ನು ಪಡೆದುಕೊಳ್ಳಲು ಕೋರಲಾಗಿದೆ. ಹೆಚ್ಚಿನ ವಿವರಗಳನ್ನು ಮತ್ತು ಅರ್ಜಿ ಫಾರಂಗಳನ್ನು ಕಾಫಿ ಮಂಡಳಿ ಸಂಪರ್ಕಾಧಿಕಾರಿಗಳ ಕಛೇರಿಯಿಂದ ಪಡೆಯಬಹುದು.

## ಬೆಳ್ಳಯ್ಯ ಗೌಡ್ರು !!

(3ನೇ ಪುಟದಿಂದ)

ಸೇರುವ ರಸ್ತೆಯಲ್ಲಿ ಆಗಾಗ್ಗೆ ತಮ್ಮ ಹದ್ದಿನ ಕಣ್ಣು ಹಾಯಿಸುತ್ತಿದ್ದು ಒಂದೆರಡು ಲಾರಿ ಕಳ್ಳ ಸಾಗಾಣಿಕೆ ಮಾಲುಗಳನ್ನು ಹಿಡಿಸಿದ್ದೇ ಆದರೆ ಪ್ರಧಾನ ಪಟ್ಟ ಹಿಡಿದದ್ದು ಸಾರ್ಥಕವಾಯಿತೆನ್ನೋಣ....?

ಏನೇ ಆಗಲಿ, ಕನ್ನಡ ಬಿಟ್ಟು ಬೇರೆ ಭಾಷೆಯಲ್ಲಿ ಯಾವುದೇ ಇಲಾಖೆಯಿಂದ ಬರತಕ್ಕ ಕಾಗದ-ಪತ್ರಗಳನ್ನು "ಬರವಣಿಗೆ ಕನ್ನಡದಲ್ಲಿರಲಿ" ಎಂದು ಮುಲಾಜಿಲ್ಲದೆ ಸರಾ ಬರೆದು ವಾಪಾಸು ಕಳುಹಿಸುವ ಸಾಹಸ ಮಾಡಿ; ನೀವೇ ಓದಿ ತಿಳಿದುಕೊಳ್ಳದ ಭಾಷೆ ನಿಮಗೇಕೆ, ಅಲ್ಲವೆ?

ತಮ್ಮ ಮಂಡಲದ ಪ್ರಗತಿಯ ವೀಕ್ಷಣೆಯಲ್ಲಿರುತ್ತಾ, ಕನ್ನಡ ಸಾಹಿತ್ಯ ಪರಿಷತ್ತನ್ನು ಪಕ್ಕೆಕ್ಕಿರಿಸಿಕೊಳ್ಳುವುದು ಎಷ್ಟು ದಿನಕ್ಕೆಂದು ನಿರೀಕ್ಷಿಸುತ್ತಾ, ಶುಭ ಹಾರೈಸುತ್ತೇವೆ.

—ಎಂ. ಬಿ. ಶ್ರೀನಿವಾಸ ಮೂರ್ತಿ.

## ಜಿಲ್ಲಾ ಲೋಕದಳಕ್ಕೆ ಸದಸ್ಯರಾಗಲು ಆಹ್ವಾನ

ಚಿಕ್ಕಮಗಳೂರು: ಈಚಿನ ಹರಿಯಾಣ ವಿಧಾನಸಭೆ ಚುನಾವಣೆಯಲ್ಲಿ ಲೋಕದಳ ವು ತೃಪ್ತಿಕರವಾದ ಬಹುಮತ ಗಳಿಸಿದ ಬಗ್ಗೆ ಚಿಕ್ಕಮಗಳೂರು ಜಿಲ್ಲಾ ಲೋಕದಳ ಘಟಕವು ಮೆಚ್ಚುಗೆ ವ್ಯಕ್ತಪಡಿಸಿ, ಇದು ದೇಶಕ್ಕೇ ಒಂದು ಹೊಸ ಮೇಲ್ಪಂಕ್ತಿಯಾಗಲಿದೆ ಎಂದಿದೆ.

ಜಿಲ್ಲೆಯಲ್ಲೂ ರಾಜ್ಯದಲ್ಲೂ ಲೋಕದಳವನ್ನು ಪುನರ್ ಸಂಘಟಿಸಲಾಗುತ್ತಿದ್ದು, ಪಕ್ಷಕ್ಕೆ ಸೇರಬಯಸುವವರು ಪಕ್ಷದ ಜಿಲ್ಲಾ ಅಧ್ಯಕ್ಷ ಅಹಮದ್ ಶರೀಫ್ ಅವರನ್ನು ಸಂಪರ್ಕಿಸುವಂತೆ ಕೋರಲಾಗಿದೆ.

## ಕೆ. ಎಂ. ವಿ. : ಸ್ಮರಣೆ

(3ನೇ ಪುಟದಿಂದ)

ಆದ ಯಾವುದೋ ದೌರ್ಬಲ್ಯಗಳೇ? ಯಾವುದು ಕಾರಣ?

ಸ್ವತಃ ಗೋವಿಂದಗೌಡರೇ ಯೋಚಿಸಿ ಉತ್ತರ ಕಂಡುಕೊಳ್ಳಬೇಕಾದ ಪ್ರಶ್ನೆಯಿದು. ಅಂಥ ಉತ್ತರ ಅವರಿಗೆ ಆದಷ್ಟು ಬೇಗ ಸಿಕ್ಕಿ, ಅದಕ್ಕೆ ಅನುಗುಣವಾದ ತಿದ್ದುಪಡಿಯನ್ನು ಅವರು ಮಾಡಿಕೊಂಡರೆ ಮಾತ್ರ ಅವರ ಇನ್ನುಳಿದ ಆಡಳಿತಾವಧಿಯಾದರೂ ಈ ಕ್ಷೇತ್ರಕ್ಕೆ ಹೆಚ್ಚು ಪ್ರಯೋಜನಕಾರಿಯಾದೀತು. —ಕಲ್ಕುಳಿ ವಿಠಲ ಹೆಗ್ಡೆ









ಸಂಪಾದಕ, ಮುದ್ರಕ ಮತ್ತು ಪ್ರಕಾಶಕ: ಸಿರಿಮನೆ ನಾಗರಾಜ್, ಅಚ್ಚು: ದೀಪಟೆಗೆ ಅಚ್ಚುಕೂಟ, ಕೊಪ್ಪ.